**ಕರ್ನಾಟಕ ವಿಧಾನ ಪರಿಷತ್ತು**
**144 ನೇ ಅಧಿವೇಶನ 2021**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1152
ಮಾನ್ಯ ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 22-09-2021
ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಲೋಕೋಪಯೋಗಿ ಇಲಾಖೆಯ ರಸ್ತೆಗಳ ಟೋಲ್ ಸಂಗ್ರಹವನ್ನು ಖಾಸಗಿ ಸಂಸ್ಥೆಗಳಿಗೆ ನೀಡಿದ್ದು, ಇದರಿಂದ ಟೋಲ್‌ಗೇಟ್ ಇರುವ ಪ್ರದೇಶದ ನಿವಾಸಿಗಳಿಗೆ ಅನಾನುಕೂಲ ವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆ.ಆರ್.ಡಿ.ಸಿ.ಎಲ್ ವತಿಯಿಂದ ಟೋಲ್ ಸಂಗ್ರಹಣೆಯನ್ನು ಗುತ್ತಿಗೆದಾರರಿಗೆ ಟೆಂಡರ್ ಮುಖೇನ ವಹಿಸಿದ್ದು, ಸದರಿ ಗುತ್ತಿಗೆದಾರರು ಸರ್ಕಾರದ ಅಧಿಸೂಚನೆ ಸಂಖ್ಯೆ:PWD 06 EAP 2012 (P3) Bengaluru ದಿನಾಂಕ 07-03-2015 ರಂದು ಹೊರಡಿಸಿರುವ ಟೋಲ್ ನೀತಿ (Toll Policy) ಗೆ ಅನುಗುಣವಾಗಿ ವರ್ಷಾವಾರು ನಿಗದಿಪಡಿಸುವ ದರಗಳಲ್ಲಿ ಗುತ್ತಿಗೆದಾರರು ಶುಲ್ಕವನ್ನು ಸಂಗ್ರಹಿಸಬೇಕಾಗಿರುತ್ತದೆ.<br><br>ಟೋಲ್ ಅಧಿಸೂಚನೆಯ ಪ್ಯಾರಾ (9) ರಲ್ಲಿ ಸ್ಥಳೀಯ ನಿವಾಸಿಗಳಿಗೆ ರಿಯಾಯಿತಿ ಸೌಲಭ್ಯವಿದ್ದು, ಅದರ ವಿವರ ಈ ಕೆಳಕಂಡಂತಿದೆ.<br><br>**9. Discounts:**<br><br>9.3 A person who owns a mechanical vehicle registered for non-commercial purposes and uses it as such for commuting on a section of State Highways, standalone structures, may obtain a pass, on payment of fee at the base rate for the year 2007-08 of Rs 150/- per calendar month and revised annually in accordance with rule 5, authorising it to cross the toll plaza specified in such pass.<br><br>Provided that such pass shall be issued only if such driver, owner or person in charge of such mechanical vehicle resides within a distance of twenty kilometers from the toll plaza specified by such person and the use of such section of State Highways, Standalone Structures as the case may be, does not extend beyond the toll plaza next to the specified toll plaza.<br><br>Provided further that no such pass shall be issued if a service road or alternative road is available for use by such driver, owner or person in charge of a mechanical vehicle. |

| | | |
|---|---|---|
| ಆ) | ಟೋಲ್ ಸಂಗ್ರಹ ಪ್ರದೇಶದಿಂದ ಎಷ್ಟು ಕಿ.ಮೀ ವ್ಯಾಪ್ತಿಯ ನಿವಾಸಿಗಳಿಗೆ ಸದರಿ ಟೋಲ್ ಗೇಟ್ ಮುಖಾಂತರ ಹೋಗುವಾಗ ಟೋಲ್ ಕಟ್ಟುವುದರಿಂದ ವಿನಾಯಿತಿ ನೀಡಲಾಗಿದೆ; | ಟೋಲ್ ಸಂಗ್ರಹ ಪ್ರದೇಶದಿಂದ 20 ಕಿ.ಮೀ ವ್ಯಾಪ್ತಿಯ ನಿವಾಸಿಗಳಿಗ, ಸದರಿ ಟೋಲ್ ಗೇಟ್ ಮುಖಾಂತರ ಹೋಗುವಾಗ ತಿಂಗಳಿಗೆ ರೂ.205/- (ಪ್ರಸ್ತುತ ದರ) ಪಾವತಿಸಿ ಲೋಕಲ್ ಪಾಸ್ (Local Pass) ಪಡೆಯುವುದರ ಮೂಲಕ ಟೋಲ್ ಶುಲ್ಕದಲ್ಲಿ ವಿನಾಯಿತಿ ಪಡೆಯಬಹುದಾಗಿದೆ. |
| ಇ) | ಟೋಲ್ ಪ್ಲಾಜಾ ನಿರ್ಮಾಣಕಾರರು ಯಾವ ಯಾವ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯಬೇಕು; ಸದರಿ ಟೋಲ್ ಪ್ಲಾಜಾದವರು ಸಂಬಂಧಿತ ಗ್ರಾಮ ಪಂಚಾಯತ್‌ಗಳಿಗೆ ಯಾವ ಯಾವ ರೀತಿಯ ತೆರಿಗೆಯನ್ನು ಪಾವತಿಸುತ್ತಾರೆ; ಟೋಲ್ ಪ್ಲಾಜದವರಿಗೆ ಕಟ್ಟಡ ತೆರಿಗೆ, ವಾಣಿಜ್ಯ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆಯೇ; ರಾಜ್ಯದಲ್ಲಿರುವ ಟೋಲ್ ಪ್ಲಾಜಾದಿಂದ ಇದುವರೆಗೆ ಸಂಗ್ರಹವಾದ ಸಿ ಎಸ್ ಆರ್ ನಿಧಿಯ ಮೊತ್ತವೆಷ್ಟು; ಸದರಿ ಸಿ. ಎಸ್. ಆರ್. ನಿಧಿಯನ್ನು ಯಾವ ಯಾವ ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಲಾಗಿದೆ? (ವಿವರ ನೀಡುವುದು) | ಟೋಲ್ ಪ್ಲಾಜಾ ಗುತ್ತಿಗೆದಾರರು/ನಿರ್ಮಾಣಕಾರರು ವಿದ್ಯುತ್ ಸಂಪರ್ಕ ಪಡೆಯಲು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಗಳಿಂದ ನಿಯಮಾನುಸಾರ ಅನುಮತಿ ಪಡೆಯಬೇಕಾಗಿರುತ್ತದೆ. ಸದರಿ ಟೋಲ್ ಪ್ಲಾಜಾದವರು ಸಂಬಂಧಿತ ಗ್ರಾಮ ಪಂಚಾಯತ್‌ಗಳಿಗೆ ತೆರಿಗೆಯನ್ನು ಪಾವತಿಸುವ ಅವಶ್ಯಕತೆ ಇರುವುದಿಲ್ಲ.<br><br>ಗುತ್ತಿಗೆದಾರರು ಕರಾರಿನಲ್ಲಿ ನಮೂದಿಸುವ ವಾರ್ಷಿಕ ಸಂದಾಯ ಮೊತ್ತವನ್ನು ನಿಗಮಕ್ಕೆ ನಿವ್ವಳವಾಗಿ (Net of Taxes) ಪಾವತಿಸಬೇಕಾಗಿದ್ದು, ಇದಕ್ಕೆ ಅನ್ವಯಿಸುವ ಎಲ್ಲಾ ಕರಗಳನ್ನು ಗುತ್ತಿಗೆದಾರರು ತಮ್ಮ ವತಿಯಿಂದಲೇ ಸಂಬಂಧಿಸಿದ ಇಲಾಖೆಗಳಿಗೆ ಸಂದಾಯ ಮಾಡಬೇಕಾಗಿರುತ್ತದೆ.<br><br>ಟೋಲ್ ಸಂಗ್ರಹಣೆ ಮಾಡುತ್ತಿರುವ ರಸ್ತೆಗಳು ರಾಜ್ಯ ಹೆದ್ದಾರಿಗೆ ಸೇರಿದ ಸಾಮಾನ್ಯ ವಾಹನ ಸಾಂದ್ರತೆಯುಳ್ಳ ರಸ್ತೆಗಳಾಗಿದ್ದು, ಇವುಗಳಲ್ಲಿ ಟೋಲ್ ಸಂಗ್ರಹಣಾ ಮೊತ್ತವು ಕಡಿಮೆ ಇದ್ದು. Corporate Social Responsibility (CSR) ನಿಧಿಯ ಪರಿಮಿತಿಗೆ ಒಳಪಡುವುದಿಲ್ಲ. |

ಸಂಖ್ಯೆ ಲೋಇ E-275 ಇಎಪಿ 2021

(ಸಿ.ಸಿ. ಪಾಟೀಲ್)
ಲೋಕೋಪಯೋಗಿ ಸಚಿವರು